# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 992 (1130)

ಸದಸ್ಯರ ಹೆಸರು : ಡಾ| ಚಂದ್ರಶೇಖರ್ ಬಿ: ಪಾಟೀಲ (ಪದವೀಧರರ ಕ್ಷೇತ್ರ)

ಉತ್ತರಿಸುವ ದಿನಾಂಕ : 07-03-2022

ಉತ್ತರಿಸುವವರು : ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯ ವ್ಯಾಪ್ತಿಯಲ್ಲಿ ಕಾಡುಪ್ರಾಣಿಗಳು ರೈತರ ಬೆಳೆದ ಬೆಳೆಗಳನ್ನು ಸಂಪೂರ್ಣವಾಗಿ ನಾಶ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br><br>ಬೀದರ್ ಜಿಲ್ಲೆಯ ವ್ಯಾಪ್ತಿಯಲ್ಲಿ ಕಳೆದ 2 ವರ್ಷಗಳಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾದ ಬೆಳೆಹಾನಿ ಪ್ರಕರಣಗಳ ವಿವರ ಹಾಗೂ ಪಾವತಿಸಿದ ದಯಾತ್ಮಕ ಧನದ ವಿವರ ಈ ಕೆಳಕಂಡಂತಿದೆ.<br>(ರೂ.ಲಕ್ಷಗಳಲ್ಲಿ)<br>ಕ್ರ.ಸಂ \| ವರ್ಷ \| ಬೆಳೆಹಾನಿ ಪ್ರಕರಣ \| ಬೆಳೆಹಾನಿ ಮೊತ್ತ<br>1 \| 2019-20 \| 236 \| 11.00<br>2 \| 2020-21 \| 286 \| 11.99<br>3 \| 2021-22 (ಜನವರಿ-2022 ರ ವರೆಗೆ) \| 113 \| 5.83 |
| ಆ) | ಬಂದಿದ್ದಲ್ಲಿ, ಸರ್ಕಾರವು ಕಾಡುಪ್ರಾಣಿಗಳನ್ನು ರೈತರ ಹೊಲಕ್ಕೆ ಬರದಂತೆ ತಡೆಯಲು ತೆಗೆದುಕೊಂಡ ಕ್ರಮವೇನು; | ವನ್ಯಪ್ರಾಣಿಗಳ ಹಾವಳಿ ತಡೆಗಟ್ಟಲು ಜಾನುವಾರು ನಿರೋಧಕ ಕಂದಕ, ಚೈನ್ ಲಿಂಕ್ ಮೆಷ್, ಮುಳ್ಳು ತಂತಿ ಬೇಲಿ, ಕಲ್ಲು ತಡೆ ಗೋಡೆ ನಿರ್ಮಾಣ ಕಾಮಗಾರಿಗಳು ಕೈಗೊಳ್ಳಲಾಗುತ್ತಿದೆ.<br><br>ಸರ್ಕಾರದ ಆದೇಶ ಸಂಖ್ಯೆ:ಅಪಜೀ 116 ಎಫ್ಎಪಿ 2016, ದಿ:16.09.2016ರ ಪ್ರಕಾರ ಅರಣ್ಯದಂಚಿನಲ್ಲಿ ಬರುವಂತಹ ಹಿಡುವಳಿ ಜಮೀನುಗಳಲ್ಲಿ ರೈತರ ಬೆಳೆದ ಬೆಳೆಗಳನ್ನು ವನ್ಯಪ್ರಾಣಿಗಳ ದಾಳಿಯಿಂದ ರಕ್ಷಿಸಲು ರೈತರಿಗೆ ಆರ್ಥಿಕವಾಗಿ ಸಹಾಯ ಮಾಡಲು ಅರಣ್ಯ ಇಲಾಖೆ ಮತ್ತು ಗ್ರಾಮಸ್ಥರ ಸಹಯೋಗದೊಂದಿಗೆ ಸಹಾಯಧನ ರೂಪದಲ್ಲಿ 50:50 ಆಧಾರದಲ್ಲಿ ಸೌರಶಕ್ತಿ ಬೇಲಿಯನ್ನು ನಿರ್ಮಾಣ ಮಾಡಲಾಗುತ್ತಿದ್ದು, ಪ್ರಸಕ್ತ ಸಾಲಿನಲ್ಲಿ ರೈತರ ಜಮೀನಿಗೆ 2 ಕಿ.ಮೀ. ಸೋಲಾರ್ ತಂತಿಬೇಲಿ ಅಳವಡಿಸುವ ಕ್ರಿಯೆ ಪ್ರಗತಿಯಲ್ಲಿದೆ. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಇ) | ಬೆಳೆಗಳು ಹಾನಿಯಾಗಿರುವ ರೈತರಿಗೆ ಸರ್ಕಾರದಿಂದ ಪರಿಹಾರ ಧನ ನೀಡಲು ಕೈಗೊಂಡ ಕ್ರಮವೇನು; | ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾದ ಬೆಳೆ ಹಾನಿ ಪ್ರಕರಣಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಅಪಜೀ 130 ಎಫ್ ಡಬ್ಲ್ಯೂಎಲ್ 2016, ದಿನಾಂಕ: 19/9/2016ರಲ್ಲಿ ನಿಗಧಿಪಡಿಸಿದ ದರಗಳಂತೆ ನಷ್ಟವಾದ ಬೆಳೆಯ ಪ್ರಮಾಣಕ್ಕನುಗುಣವಾಗಿ ಸಂಬಂಧಿತ ರೈತರ ಹೆಸರಿನ ಬ್ಯಾಂಕ್ ಖಾತೆಗೆ ನೇರವಾಗಿ ಇ-ಪರಿಹಾರ ತಂತ್ರಾಂಶದ ಮುಖಾಂತರ ಪರಿಹಾರ ಧನ ಪಾವತಿಸಲಾಗುತ್ತಿದೆ. |

ಸಂಖ್ಯೆ: ಅಪಜೀ 46 ಎಫ್‌ಡಬ್ಲ್ಯೂಎಲ್ 2022

(ಉಮೇಶ್ ವಿ. ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು